ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ನೆರಿಯ ಗ್ರಾಮದ ವ್ಯಾಪ್ತಿಯ ರಕ್ಷಿತಾರಣ್ಯದ ಕುರಿತು ಮಾಹಿತಿ

ಶ್ರೀ ಕೆ. ಹರೀಶ್‌ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) -

35 (389) ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಬೆಳ್ತಂಗಡಿ ತಾಲ್ಲೂಕು ನೆರಿಯ ಗ್ರಾಮದ ಸರ್ವೆ ನಂ.144/145ರಲ್ಲಿ ಮೀಸಲು ಅರಣ್ಯಗಳ ಅಧಿಸೂಚನೆಗಳ ಆಧಾರದಲ್ಲಿ ಮೀಸಲು ಅರಣ್ಯಗಳ ಗಡಿಯನ್ನು ಗ್ರಾಮ ನಕ್ಷೆಯ ಮೇಲೆ ಗುರುತಿಸಿ, ಪಹಣಿ ಇಂಡೀಕರಿಸುವ ಕುರಿತಂತೆ ಕಚೇರಿ ಪತ್ರ ಸಂಖ್ಯೆ:ಬಿ1/ಕಾಯೋಶಿ/ಮೋಜಣಿ/ಸಿಆರ್14/2017-18, ದಿನಾಂಕ: 26.09.2018ಕ್ಕೆ ಸಂಬಂಧಿಸಿದಂತೆ ವಿಸ್ತೃತ ವರದಿಯೊಂದಿಗೆ ಸಂಪೂರ್ಣ ಮಾಹಿತಿ ನೀಡುವುದು ;

(ಆ) ಈ ಕುರಿತಂತೆ ಸರ್ಕಾರ ಕೈಗೊಂಡ ಕ್ರಮಗಳೇನು ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಈ ಸರ್ವೆಯ ಆರ್‌ಟಿಸಿ ಯಲ್ಲಿ ಅರಣ್ಯವೆಂದು ನಮೂದಿಸಿದ್ದು, ಅರಣ್ಯವಲ್ಲದ ಜಮೀನನ್ನು ಸರ್ಕಾರಿ ಆರ್.ಟಿ.ಸಿ.ಯಲ್ಲಿ ನಮೂದಿಸಲಾಗಿದೆಯೇ ; ಇದಕ್ಕೆ ಯಾವ ಕ್ರಮ ಕೈಗೊಂಡಿದೆ ; (ಈ ಕುರಿತು ಸಂಪೂರ್ಣ ಮಾಹಿತಿ ನೀಡುವುದು)

(ಈ) ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನಲ್ಲಿ ಅಕ್ರಮ-ಸಕ್ರಮ ಅರ್ಜಿ ವಿಲೇವಾರಿ ಯಾವ ಹಂತದಲ್ಲಿದೆ ; ಇದರಲ್ಲಿ ಡೀಮ್ಡ್ ಫಾರೆಸ್ಟ್ ಎಂದು ನಮೂದಾಗಿರುವ ಅರ್ಜಿದಾರ ಫಲಾನುಭವಿಗಳಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಅರ್ಜಿ ವಿಲೇವಾರಿ ಕುರಿತಂತೆ ಸರ್ಕಾರವು ಯಾವ ಕ್ರಮಕೈಗೊಂಡಿದೆ;

(ಉ) ಈ ರಕ್ಷಿತಾರಣ್ಯದ ಜಂಟಿ ಸರ್ವೆ ಕಾರ್ಯ ನಡೆದಿದೆಯೇ ? (ಈ ಕುರಿತು ಸಂಪೂರ್ಣ ಮಾಹಿತಿ ನೀಡುವುದು)